


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1310(1549)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಸಣ್ಣ ನೀರಾವರಿ ಸಚಿವರು

ವಿಷಯ : ಏತ ನೀರಾವರಿ ಯೋಜನೆಗಳಿಗಾಗಿ ಭೂಮಿ ಕಳೆದುಕೊಂಡಿರುವ ರೈತರ ಬಗ್ಗೆ

(ಅ) ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಜಂಬೂರು-ನುಗ್ಗೇಹಳ್ಳಿ ಮತ್ತು ಹಿರೀಸಾವೆ-ಜುಟ್ಟನಹಳ್ಳಿ ಏತ ನೀರಾವರಿ ಯೋಜನೆಗಾಗಿ ಎಷ್ಟು ಗ್ರಾಮಗಳಲ್ಲಿ ಎಷ್ಟು ಎಕರೆ ಜಮೀನನ್ನು ಭೂಸ್ವಾಧೀನ ಮಾಡಿಕೊಳ್ಳಲಾಗಿದೆ; ಜಮೀನು ಕಳೆದುಕೊಂಡಿರುವ ಸಂತ್ರಸ್ಥರ ಹೆಸರು ಮತ್ತು ಊರಿನ ವಿವರಗಳೊಂದಿಗೆ ಮಾಹಿತಿ ನೀಡುವುದು;

(ಆ) ಈ ಯೋಜನೆಗಾಗಿ ಭೂಮಿ ಕಳೆದುಕೊಂಡ ರೈತರಿಗೆ ಸರ್ಕಾರದಿಂದ ಪರಿಹಾರ ನೀಡಲು ಎಕರೆವಾರು ನಿಗದಿಪಡಿಸಿರುವ ಬೆಲೆ ಎಷ್ಟು; ಇದಕ್ಕಾಗಿ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನವೆಷ್ಟು ಮತ್ತು ಇದರಲ್ಲಿ ಪರಿಹಾರ ನೀಡಿರುವ ಮೊತ್ತವೆಷ್ಟು;

(ಇ) ಈ ಯೋಜನೆಗಳಡಿ ಇದುವರೆಗೂ ಪರಿಹಾರ ಪಡೆದಿರುವ ಭೂ ಸಂತ್ರಸ್ಥರ ಹೆಸರು, ಪರಿಹಾರದ ಮೊತ್ತ ಮತ್ತು ಊರಿನ ವಿವರಗಳನ್ನು ನೀಡುವುದು;

(ಈ) ಈ ಯೋಜನೆಗಳಡಿ ಇದುವರೆಗೂ ಪರಿಹಾರ ಪಡೆಯದ ಭೂ ಸಂತ್ರಸ್ಥರ ಹೆಸರು, ಪರಿಹಾರದ ಮೊತ್ತ ಮತ್ತು ಊರಿನ ವಿವರಗಳನ್ನು ನೀಡುವುದು; ಇವರಿಗೆ ಪರಿಹಾರ ನೀಡಲು ವಿಳಂಬವಾಗಿರುವುದಕ್ಕೆ ಕಾರಣಗಳೇನು;

(ಉ) ಈ ಯೋಜನೆಗಳಡಿ ಕೈಗೊಂಡಿರುವ ಕಾಮಗಾರಿಗಳು ಯಾವುವು; ಕಾಮಗಾರಿಗಳು ಯಾವ ಹಂತದಲ್ಲಿವೆ; ಈ ಕಾಮಗಾರಿಗಳಿಗಾಗಿ ಮಂಜೂರಾದ ಹಾಗೂ ಬಿಡುಗಡೆಯಾಗಿರುವ ಅನುದಾನವೆಷ್ಟು; ಇದರಲ್ಲಿ ಗುತ್ತಿಗೆದಾರರಿಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಕಾಮಗಾರಿವಾರು ವಿವರ ನೀಡುವುದು?